| | | | |
|---|---|---|---|
| | | ಕೈಗಾರಿಕಾ ನಿವೇಶನಗಳನ್ನು (ಗರಿಷ್ಠ 2 ಎಕರೆ) ಮತ್ತು ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ.<br><br>8. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪ ಯೋಜನೆ ಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಗರಿಷ್ಠ ರೂ.10.00 ಲಕ್ಷ ಯೋಜನಾ ವೆಚ್ಚದ ಮೇಲೆ ಶೇ.60 ರಷ್ಟು ಗರಿಷ್ಠ ರೂ.5.00 ಲಕ್ಷ ಸಹಾಯಧನ ನೀಡಲಾಗುತ್ತಿದೆ.<br><br>9. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಮೊದಲ ಪೀಳಿಗೆಯ ಉದ್ಯಮಿದಾರರು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಸ್ಥಾಪಿಸುವ ಹೊಸ ಘಟಕಗಳಿಗೆ ಗರಿಷ್ಠ ರೂ.2.00 ಕೋಟಿ ಯೋಜನಾ ವೆಚ್ಚದಲ್ಲಿ The Debt Equity Ratio 2:1 ಪ್ರಕಾರ (2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ)ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಬಡ್ಡಿರಹಿತ ಗರಿಷ್ಠ ರೂ.33.00 ಲಕ್ಷ ಸಾಫ್ಟ್‌ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯ ನೀಡಲಾಗುತ್ತಿದೆ. | 9. **Soft seed capital assistance to micro and small enterprises.**<br><br>Under this scheme, financial assistance to the extent of 50% of 1/3 of promoter's contribution will be given to SC/ST first generation entrepreneurs, intending to start new enterprises by availing loan from banks. Soft seed capital of maximum Rs.33.00 lakh will be sanctioned for the projects with less than Rs.2.0 crore investments on plant and machinery and Debt Equity ratio of 2:1. |

ಸಿಐ 51 ಎಸ್‌ಎಸ್‌ಐ 2021

(ಸಿ.ಸಿ ಪಾಟೀಲ್)

ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು

**ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 3121 ಗೆ ಪೂರಕ ಟಿಪ್ಪಣಿ**

ಕರ್ನಾಟಕದಲ್ಲಿ ಜೂನ್ 2020 ರ ಅಂತ್ಯದವರೆಗೆ 8,75,336 ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳು ನೊಂದಣಿಯಾಗಿದ್ದು ಇವು 60,21,569 ಜನರಿಗೆ ಉದ್ಯೋಗ ಕಲ್ಪಿಸಿವೆ. ಇವುಗಳು ಹೂಡಿರುವ ಒಟ್ಟು ಬಂಡವಾಳವು ರೂ.1,02,558 ಕೋಟಿಗಳಾಗಿರುತ್ತದೆ.

ಕರ್ನಾಟಕ ಸರ್ಕಾರವು ರಾಜ್ಯದಲ್ಲಿ ತಂತ್ರಜ್ಞಾನ ಆಧಾರಿತ ಶಿಕ್ಷಣವನ್ನು ಪಡೆದಿರುವ ಯುವಕ/ ಯುವತಿಯರಿಗೆ ಮಾರ್ಗದರ್ಶನ ನೀಡಲು ಹಾಗೂ ಅವರುಗಳು ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಮುಂದಾಗುವಂತೆ ಮಾಡಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿದೆ.

ಭಾರತ ಸರ್ಕಾರದ ಸಿಪೆಟ್ ಸಂಸ್ಥೆಯೊಂದಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸಹಭಾಗಿತ್ವದಲ್ಲಿ ಬೆಂಗಳೂರಿನಲ್ಲಿ "ಅಡ್ವಾನ್ಸ್ಡ ಪಾಲಿಮರ್ ಡಿಸೈನ್ ಅಂಡ್ ಡೆವಲಪ್‌ಮೆಂಟ್ ರೀಸರ್ಚ್ ಲ್ಯಾಬ್" ನ್ನು ಒಟ್ಟು ರೂ.100 ಕೋಟಿ ವೆಚ್ಚದಲ್ಲಿ ಸ್ಥಾಪಿಸಲಾಗಿದ್ದು ಇದರಿಂದ ಉದ್ಯಮಶೀಲರಿಗೆ ಮತ್ತು ತಂತ್ರಜ್ಞರಿಗೆ ಉಪಯೋಗವಾಗಲಿದೆ.

ಅದೇ ರೀತಿಯಾಗಿ ಕೇಂದ್ರ ಸರ್ಕಾರದ ಸೆಂಟ್ರಲ್ ಮ್ಯಾನುಫ್ಯಾಕ್ಚರಿಂಗ್ ಟೆಕ್ನಾಲಜಿ ಇನ್ಸಿಟಿಟ್ಯೂಟ್ ನಲ್ಲಿ ರಾಜ್ಯ ಸರ್ಕಾರದ ಸಹಯೋಗದೊಂದಿಗೆ ಪೀಣ್ಯ ಕೈಗಾರಿಕಾ ಪ್ರದೇಶದಲ್ಲಿರುವ ಮಷಿನ್ ಟೂಲ್ ಕೈಗಾರಿಕೆಗಳಿಗೆ ಅನುಕೂಲವಾಗುವ ಪ್ರಿಶಿಷನ್ ಮೆಟ್ರಾಲಜಿ ಲ್ಯಾಬ್‌ನ್ನು ಸ್ಥಾಪಿಸಲಾಗಿದೆ.

ಅಲ್ಲದೇ, ಸರ್ಕಾರವು ಹೊಸ ಕೈಗಾರಿಕಾ ನೀತಿ 2020-25 ರಲ್ಲಿ ಈ ಕೆಳಗಿನ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

**1. ಉದ್ಯಮಶೀಲತಾ ಅಭಿವೃದ್ಧಿ ಕಾರ್ಯಕ್ರಮ**

ಹೊಸ ತಲೆಮಾರಿನ ಉದ್ಯಮಿಗಳನ್ನು ಮತ್ತು ನವೋದ್ಯಮಗಳನ್ನು ಉತ್ತೇಜಿಸಲು ಉದ್ಯಮಶೀಲತೆ ಅಭಿವೃದ್ಧಿ ಮತ್ತು ನಿರ್ವಹಣೆ ಕಾರ್ಯಕ್ರಮಗಳು, ನಿರ್ದಿಷ್ಟ ಕ್ಷೇತ್ರ ಸಂಬಂಧಿ ಕೌಶಲ್ಯ ಕಾರ್ಯಕ್ರಮಗಳು, ಪ್ರಾಯೋಗಿಕ ತರಬೇತಿ, ಮಾರ್ಗದರ್ಶನಗಳನ್ನು ಟೆಕ್ಸಾಕ್ / ಜಿಲ್ಲಾ ಕೈಗಾರಿಕಾ ಕೇಂದ್ರಗಳಿಂದ ನೀಡಲು ಕಾರ್ಯಕ್ರಮವನ್ನು ರೂಪಿಸಲಾಗಿದೆ.

2020-21 ನೇ ಸಾಲಿನಲ್ಲಿ ಟೆಕ್ಸಾಕ್ ಸಂಸ್ಥೆ ಈಗಾಗಲೇ ಆನ್‌ಲೈನ್ ಮುಖಾಂತರ/ ಆಫ್‌ಲೈನ್ ಮುಖಾಂತರ ತಾಂತ್ರಿಕ ಶಿಕ್ಷಣ ಪಡೆದ ವಿದ್ಯಾರ್ಥಿಗಳಿಗೆ ಹಲವಾರು ಉದ್ಯಮಶೀಲತಾ ತರಬೇತಿ ಕಾರ್ಯಕ್ರಮಗಳನ್ನು ನಡೆಸಿರುತ್ತದೆ. ಮುಂದಿನ ತಿಂಗಳು ನವೋದ್ಯಮ ಸ್ಥಾಪಿಸುವ ಉದ್ಯಮಶೀಲರಿಗೆ ಉದ್ಯಮಶೀಲತಾ ತರಬೇತಿಯನ್ನು ಹಮ್ಮಿಕೊಳ್ಳಲಾಗಿದೆ.

**2. ನಿರ್ದಿಷ್ಟ ವಲಯದ ಕೌಶಲ್ಯಗಳಿಗಾಗಿ ಸಾಂಸ್ಥಿಕ ಸಹಯೋಗ**

ಎಲ್ಲಾ ವಲಯಗಳಲ್ಲಿ ನಿರ್ದಿಷ್ಟ ವಲಯದ ಉನ್ನತ ಕೌಶಲ್ಯ ಮತ್ತು ಕೌಶಲ್ಯ ಹೆಚ್ಚಳಕ್ಕಾಗಿ ಸಾಂಸ್ಥಿಕ ಸಹಯೋಗ/ವೃತ್ತಿ ತರಬೇತಿ ಸಂಸ್ಥೆಗಳು ಕೈಗಾರಿಕಾ ಸಂಘಟನೆಗಳ ಸಹಯೋಗದೊಂದಿಗೆ ಸ್ಥಾಪಿಸಲು ಉಪಕರಣಗಳು ಮತ್ತು ಯಂತ್ರೋಪಕರಣಗಳ ವೆಚ್ಚದ ಮೇಲೆ 50% ಬಂಡವಾಳ ಸಹಾಯಧನಕ್ಕೆ ಅರ್ಹವಾಗಿದ್ದು ಗರಿಷ್ಟ ಮಿತಿ ರೂ.15.00 ಲಕ್ಷ ಆಗಿರುತ್ತದೆ. ಅಗತ್ಯವಿದ್ದಲ್ಲಿ ರಾಜ್ಯವು ಸಹಾಯಕರ ಪಾತ್ರ ನಿರ್ವಹಿಸಲಿದೆ. ಈ ಬಂಡವಾಳ ಸಹಾಯಧನವು ನೀತಿಯ ಅವಧಿಯಲ್ಲಿ ವರ್ಷಕ್ಕೆ ಕೇವಲ 2 ಘಟಕಗಳಿಗೆ ಮಾತ್ರ ಸೀಮಿತವಾಗಿದೆ.

**3. ಉದ್ಯೋಗದೊಂದಿಗೆ ತರಬೇತಿ**

ಐಟಿಐ ತೇರ್ಗಡೆ ಹೊಂದಿದ 2,000 ಅಭ್ಯರ್ಥಿಗಳಿಗೆ ಉದ್ಯೋಗಾರ್ಹತೆ ಹೆಚ್ಚಿಸಲು ಪ್ರತೀವರ್ಷ ಉದ್ಯೋಗ ತರಬೇತಿ ನೀಡಲು ಯೋಜನೆ ರೂಪಿಸಲಾಗಿದೆ. ಕೈಗಾರಿಕೆಗಳು ಪಾವತಿಸುವ ಸಂಬಳದ 50%ನಷ್ಟು ಪ್ರೋತ್ಸಾಹಧನ(ಸ್ಟೈಪೆಂಡ್)ವನ್ನು ಅಭ್ಯರ್ಥಿಗಳಿಗೆ ನೀಡಲು ಪ್ರಸ್ತಾವಿಸಲಾಗಿದ್ದು, ಪ್ರತಿ ಅಭ್ಯರ್ಥಿಗೆ ಮಾಸಿಕ ರೂ.7,000 ಮಿತಿ. ಉದ್ಯೋಗ ತರಬೇತಿಯ 6 ತಿಂಗಳಿಗೆ ಈ ಪ್ರೋತ್ಸಾಹಧನ ನೀಡಲಾಗುವುದು.